CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೯, ೨೦೦೫ (ಆಶ್ವಯುಜ ೭, ಶಕ ವರ್ಷ ೧೯೨೭) | ಸಂಚಿಕೆ ೩೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು ಸಚಿವಾಲಯ

**ವಿಷಯ:** ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಗೆ ಪ್ರಥಮ ನಿರ್ದೇಶಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 46 ಎಲ್‌ಸಿಇ 2005, ದಿನಾಂಕ: 28.6.2005.

2) ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 88 ಆಡಳಿತ 2005 (ಭಾ), ದಿನಾಂಕ: 6.8.2005.

3) ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ನೋಂದಣಿ ಪ್ರಮಾಣ ಪತ್ರ ದಿನಾಂಕ: 9.8.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಕಾನೂನು ಇಲಾಖೆಗೆ ನೀತಿ ಮತ್ತು ಕ್ರಿಯಾಯೋಜನೆ ರೂಪಿಸಿದ್ದು, ಆ ಆದೇಶದಲ್ಲಿ ನಮೂದಿಸಿರುವ ಧ್ಯೇಯೋದ್ದೇಶಗಳ ಅಡಿ ಕ್ರಮ ಸಂಖ್ಯೆ 19ರ ಪ್ರಕಾರ ಪ್ರಸ್ತುತ ಇರುವ ಕಾನೂನುಗಳನ್ನು ಪರಿಶೀಲಿಸಿ ಸುಧಾರಣೆಗೆ ಸಲಹೆ ನೀಡುವುದರ ಜೊತೆಗೆ ಹೊಸ ಕಾನೂನುಗಳನ್ನು ರೂಪಿಸಲು ಕಾನೂನು ಸುಧಾರಣಾ ಕೇಂದ್ರ ಸ್ಥಾಪಿಸಲು ಅವಕಾಶವಿರುತ್ತದೆ. ಅದೇ ರೀತಿ ಸದರಿ ಆದೇಶಕ್ಕೆ ಲಗತ್ತಿಸಿರುವ ಅನುಬಂಧದ ಕ್ರಮ ಸಂಖ್ಯೆ 13ರ ಪ್ರಕಾರ ಅಂತಹ ಕೇಂದ್ರವು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸಬೇಕಾಗಿರುತ್ತದೆ.

1. ಇಲಾಖೆಯ ಕಾರ್ಯನೀತಿಯ ಕುರಿತಂತೆ ವಿಭಿನ್ನ ಅಭಿಪ್ರಾಯಗಳನ್ನು ಸಂಗ್ರಹಿಸಲು ವಿಚಾರಗೋಷ್ಠಿ ಕಾರ್ಯಾಗಾರ ಹಾಗೂ ವಿಚಾರ ಸಂಕೀರಣಗಳನ್ನು ಏರ್ಪಡಿಸುವುದು.

2. ತಜ್ಞರ/ತಜ್ಞರ ಸಂಸ್ಥೆಗಳ ಸಹಯೋಗದೊಡನೆ ಸಂಶೋಧನಾ ಕಾರ್ಯ ಕೈಗೊಳ್ಳುವುದು.

3. ಹಾಲಿ ಇರುವ ಕಾನೂನುಗಳನ್ನು ನಿಯತಕಾಲಿಕವಾಗಿ ಪರಿಶೀಲನೆ ಮಾಡುವುದರ ಜೊತೆಗೆ ಅವಶ್ಯವಿರುವ ಕಡೆ ಸೂಕ್ತ ತಿದ್ದುಪಡಿಗಳನ್ನು ಸೂಚಿಸುವುದು.

4. ಈವರೆವಿಗೂ ನಿಯಂತ್ರಣಕ್ಕೆ ಒಳಪಡದ ಚಟುವಟಿಕೆಗಳನ್ನು ನಿಯಂತ್ರಿಸುವುದಕ್ಕಾಗಿ ಅಂಗೀಕರಿಸಬೇಕಾದ ಕಾನೂನುಗಳನ್ನು ರೂಪಿಸುವುದು.

5. ಸರ್ಕಾರವು ಸೂಚಿಸುವ ಇತರೆ ಕರಡು ಶಾಸನಗಳನ್ನು ರೂಪಿಸುವುದು.

ಮೇಲೆ (3) ರಲ್ಲಿ ಓದಲಾದ ಪ್ರಮಾಣ ಪತ್ರದಲ್ಲಿ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯನ್ನು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಅಡಿ ದಿನಾಂಕ: 9.8.2005 ರಂದು ನೋಂದಾಯಿಸಲ್ಪಟ್ಟಿದ್ದು, ಆ ಸಂಸ್ಥೆಗೆ ಪ್ರಥಮ ನಿರ್ದೇಶಕರನ್ನು ನೇಮಿಸಿರುವುದು ಅವಶ್ಯಕವಾಗಿದೆ.

ಆ ಹಿನ್ನೆಲೆಯಲ್ಲಿ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 185 ಎಲ್‌ಎಎಂ 2005, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2005**

ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣೆ ಸಂಸ್ಥೆಯ ನಿಯಮ ಮತ್ತು ಪರಿನಿಯಮಗಳ 15ನೇ ನಿಯಮದ ಮೇರೆಗೆ ಶ್ರೀ ಜಿ. ದಕ್ಷಿಣಾಮೂರ್ತಿ, ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಹಾಗೂ ಶಾಸನ ರಚನೆ ಇಲಾಖೆ ಇವರನ್ನು ಸದರಿ ನಿಯಮಗಳಲ್ಲಿನ ಷರತ್ತುಗಳಿಗೊಳಪಟ್ಟು ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣೆ ಸಂಸ್ಥೆಯ ಪ್ರಥಮ ನಿರ್ದೇಶಕರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗಂಗನರಸಯ್ಯ**

ಪಿ.ಆರ್. 1315 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

## ಶಿಕ್ಷಣ ಸಚಿವಾಲಯ

**ವಿಷಯ:** ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣೆಬೆನ್ನೂರು ಇಲ್ಲಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ರಿಟ್ ಅರ್ಜಿ ಸಂಖ್ಯೆ: 16948/2004 (ಜಿ.ಎಮ್/ಪಿಸಿಸಿ) ರಲ್ಲಿ ನ್ಯಾಯಾಲಯ ದಿನಾಂಕ: 16.04.2004 ರಂದು ನೀಡಿರುವ ಆದೇಶ.

2) ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ದಿನಾಂಕ: 25.06.2005.

**ಪ್ರಸ್ತಾವನೆ:**

ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣೆಬೆನ್ನೂರು ಇಲ್ಲಿನ ಆಡಳಿತ ಮಂಡಳಿಯ ವಿವಾದವು ಪ್ರಸ್ತುತ ನ್ಯಾಯಾಲಯದಲ್ಲಿ ದಾಖಲಾಗಿದ್ದು, ಪ್ರಕರಣವು ನ್ಯಾಯಾಲಯದಲ್ಲಿ ಇತ್ಯರ್ಥವಾಗುವವರೆಗೆ ಹಾವೇರಿ ಉಪ ವಿಭಾಗಾಧಿಕಾರಿಯವರನ್ನು ಸದರಿ ಸಂಘದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಉಲ್ಲೇಖ (1) ರಲ್ಲಿ ಓದಲಾದ ದಿನಾಂಕ: 16.04.2004ರ ಅನ್ವಯ ನ್ಯಾಯಾಲಯ ಆದೇಶಿಸಲಾಗಿತ್ತು. ಆ ಪ್ರಕಾರ ಅಂದಿನ ಹಾವೇರಿ ಉಪ ವಿಭಾಗಾಧಿಕಾರಿಗಳಾದ ಶ್ರೀ ಬಿ.ಹೆಚ್. ಪೂಜಾರ್‌ರವರು ಆಡಳಿತಾಧಿಕಾರಿಯಾಗಿ ದಿನಾಂಕ: 14.05.2004 ರಿಂದ ಅಧಿಕಾರ ವಹಿಸಿಕೊಂಡಿದ್ದರು. ಶ್ರೀ ಬಿ.ಎಚ್. ಪೂಜಾರ್‌ರವರು ದಿನಾಂಕ: 28.02.2005 ರಂದು ವಯೋನಿವೃತ್ತಿ ಹೊಂದಿದ ಕಾರಣ ಹಾವೇರಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನದ ಸಹಾಯಕರು ಹೆಚ್ಚುವರಿ ಪ್ರಭಾರದಲ್ಲಿದ್ದ ಕಾರಣ ಮೇಲೆ ಉಲ್ಲೇಖ (2) ರಲ್ಲಿ ಓದಲಾದ ದಿನಾಂಕ: 25.06.2005ರ ಆದೇಶದಲ್ಲಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಸದರಿ ಸಂಘದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿತ್ತು. ಇದೀಗ ಹಾವೇರಿ ಉಪ ವಿಭಾಗಾಧಿಕಾರಿ ಹುದ್ದೆಗೆ ರೆಗ್ಯುಲರ್ ವಿಭಾಗಾಧಿಕಾರಿಯನ್ನಾಗಿ ಶ್ರೀ ಡಿ.ಹೆಚ್. ಪಾಂಡುರಂಗನ್ ರವರನ್ನು ನೇಮಕ ಮಾಡಿದ್ದು, ದಿನಾಂಕ: 21.07.2005 ರಂದು ಕಾರ್ಯಭಾರ ವಹಿಸಿಕೊಂಡಿರುತ್ತಾರೆ. ಇದರಿಂದಾಗಿ ಶ್ರೀ ಡಿ.ಹೆಚ್. ಪಾಂಡುರಂಗನ್ ರವರನ್ನು ಸದರಿ ಸಂಘದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2005**

ಮೇಲೆ ವಿವರಿಸಿದ ಕಾರಣಗಳಿಂದಾಗಿ ರಾಣೆಬೆನ್ನೂರಿನ ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್ ಇಲ್ಲಿನ ಆಡಳಿತಾಧಿಕಾರಿಯನ್ನಾಗಿ ಹಾವೇರಿ ಉಪ ವಿಭಾಗಾಧಿಕಾರಿಗಳಾದ ಶ್ರೀ ಡಿ.ಹೆಚ್. ಪಾಂಡುರಂಗನ್ ರವರನ್ನು ದಿನಾಂಕ: 21.07.2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 1238 ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಉನ್ನತ ಶಿಕ್ಷಣ)

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಹೆಚ್.ಆರ್. ತಳವಾರ್, ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಇವರನ್ನು ರಾಯಚೂರಿಗೆ ವರ್ಗಾವಣೆ ಮಾಡಿರುವ ಬಗ್ಗೆ - ಆದೇಶ.

**ಓದಲಾಗಿದೆ:** 1. ಶ್ರೀ ಹೆಚ್.ಆರ್. ತಳವಾರ್, ಸಹಾಯಕ ನಿರ್ದೇಶಕರು ಇವರ ಮೇಲ್ಮನವಿ ದಿನಾಂಕ: 14.7.2005.

2. ಕೆ.ಎ.ಟಿ.ಯ ಅರ್ಜಿ ಸಂಖ್ಯೆ: 5663/2005 ದಿನಾಂಕ: 18.7.2005ರ ಆದೇಶ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಶ್ರೀ ಹೆಚ್.ಆರ್. ತಳವಾರ್ ಇವರ ಮೇಲ್ಮನವಿಯಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಆನಾಸ 74 ಆಇಸೇ 2005 (ಭಾ) ದಿನಾಂಕ: 30.6.2005 ರಲ್ಲಿ ಸಹಾಯಕ ನಿರ್ದೇಶಕರು, ಉಪನಿರ್ದೇಶಕರ ಕಛೇರಿ, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಧಾರವಾಡದಿಂದ ಸಹಾಯಕ ನೋಂದಣಾಧಿಕಾರಿಗಳು, ಜಿಲ್ಲಾ ಗ್ರಾಹಕರ ವೇದಿಕೆ, ರಾಯಚೂರು ಇಲ್ಲಿಗೆ ವರ್ಗಾಯಿಸಿರುವುದರಿಂದ ಅನ್ಯಾಯವಾಗಿರುವುದಾಗಿ ತಿಳಿಸಿ ಅವರನ್ನು ಧಾರವಾಡದಲ್ಲಿಯೇ ಮುಂದುವರಿಸಬೇಕಾಗಿ ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶದಲ್ಲಿ ಇವರ ಮೇಲ್ಮನವಿಯನ್ನು ಪರಿಶೀಲಿಸುವಂತೆ ಹಾಗೂ ಈ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರವು ಪುನರ್‌ಪರಿಶೀಲಿಸಿ ಕೆ.ಎ.ಟಿ. ಆದೇಶ ತಲುಪಿದ 15 ದಿನದೊಳಗೆ ಸೂಕ್ತ ಆದೇಶ ಹೊರಡಿಸಲು ತೀರ್ಪನ್ನು ನೀಡಿದೆ. ಆದ್ದರಿಂದ ಶ್ರೀ ಹೆಚ್.ಆರ್. ತಳವಾರ್ ಇವರ ಮೇಲ್ಮನವಿ ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ತೀರ್ಪನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 146 ಆಇಸೇ 2005, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2005**

ಶ್ರೀ ಹೆಚ್.ಆರ್. ತಳವಾರ್, ಸಹಾಯಕ ನಿರ್ದೇಶಕರು, ಉಪನಿರ್ದೇಶಕರ ಕಛೇರಿ, ಧಾರವಾಡ ಇವರ ವಿರುದ್ಧ ಮಾಡಿರುವ ದೂರಿನ ಆಧಾರ ಆಡಳಿತಾತ್ಮಕ ಹಿತದೃಷ್ಟಿಯಿಂದ ಸಹಾಯಕ ನೋಂದಣಾಧಿಕಾರಿಗಳು, ಜಿಲ್ಲಾ ಗ್ರಾಹಕರ ವೇದಿಕೆ, ರಾಯಚೂರು ಇಲ್ಲಿಗೆ ವರ್ಗಾವಣೆ ಮಾಡಲಾಗಿದೆ. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶವನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಆನಾಸ 74 ಆಇಸೇ 2005(ಭಾ) ದಿನಾಂಕ: 30.6.2005 ರಲ್ಲಿ ಮಾಡಿರುವ ವರ್ಗಾವಣೆ ಆದೇಶವನ್ನು ಸ್ಥಿರೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 1202 ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನರುಜ್ಜೀವನಕ್ಕೆ ಸರ್ಕಾರದಿಂದ ಆರ್ಥಿಕ ನೆರವು.

**ಉಲ್ಲೇಖ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 202 ಎಸ್‌ಜಿಎಫ್ 04, ದಿನಾಂಕ: 06.05.2005.
2. ಸರ್ಕಾರದ ಆದೇಶ ಸಂಖ್ಯೆ: ಸಿಐ 150 ಸಿಎಂಐ 05, ದಿನಾಂಕ: 13.07.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿರುವ ಸರ್ಕಾರದ ಆದೇಶದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ ಈ ಕಾರ್ಖಾನೆಗೆ 2005-06ನೇ ಸಾಲಿನ ತನ್ನ ಕಬ್ಬು ಅರೆಯುವ ಚಟುವಟಿಕೆಯನ್ನು ಪ್ರಾರಂಭಿಸಲು ಈ ಕೆಳಕಂಡ ಬಾಬ್ತುಗಳಿಗೆ ಉಪಯೋಗಿಸುವ ಸಲುವಾಗಿ 5,52,27000/- ರೂ.ಗಳನ್ನು ರಾಜ್ಯದ ಸಾದಿಲ್ವಾರು ನಿಧಿಯಿಂದ ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| | | |
|---|---|---|
| 1. | ರೈತರಿಗೆ ಪಾವತಿಸಬೇಕಾದ ಕಬ್ಬಿನ ಬಾಕಿಗಾಗಿ | ರೂ. 88.00 ಲಕ್ಷ |
| 2. | ಡಿಸೆಂಬರ್ 04 ಹಾಗೂ ಜನವರಿ 05ರ ವೇತನ ಬಾಕಿಗಾಗಿ | ರೂ. 121.27 ಲಕ್ಷ |
| 3. | ಸರಬರಾಜುದಾರರ ಬಾಕಿಗಾಗಿ | ರೂ. 143.00 ಲಕ್ಷ |
| 4. | ಯಂತ್ರೋಪಕರಣಗಳ ಸಜ್ಜುಗೊಳಿಸುವಿಕೆಗಾಗಿ | ರೂ. 200.00 ಲಕ್ಷ |

ಮೇಲೆ ಓದಲಾದ (2) ರಲ್ಲಿರುವ ಸರ್ಕಾರದ ಆದೇಶದಲ್ಲಿ ಕೆ.ಎಸ್.ಐ.ಐ.ಡಿ.ಸಿ. ರೂ.5.00 ಕೋಟಿಗಳನ್ನು ಮೈಸೂರು ಸಕ್ಕರೆ ಕಾರ್ಖಾನೆಗೆ ರೈತರ ಕಬ್ಬು ಖರೀದಿ ಸಲುವಾಗಿ ಸರ್ಕಾರದ ಖಾತರಿಯ ಮೇಲೆ ಸಾಲವಾಗಿ ನೀಡಲು ಹಾಗೂ ಈ ಹಣವನ್ನು 2005-06ನೇ ಸಾಲಿನ ಪೂರಕ ಅನುದಾನದಲ್ಲಿ ಒದಗಿಸಿದ ನಂತರ ಕೆ.ಎಸ್.ಐ.ಐ.ಡಿ.ಸಿ. ಗೆ ಮರು ಪಾವತಿ ಮಾಡುವ ಷರತ್ತಿನೊಂದಿಗೆ ಬಿಡುಗಡೆಗೆ ನಿರ್ದೇಶಿಸಲಾಗಿತ್ತು. ಆದರೆ ಕಾರಣಾಂತರಗಳಿಂದಾಗಿ ಕೆ.ಎಸ್.ಐ.ಐ.ಡಿ.ಸಿ. ಯು ಮೈಸೂರು ಸಕ್ಕರೆ ಕಾರ್ಖಾನೆಗೆ ಹಣ ಬಿಡುಗಡೆಗೊಳಿಸಿರುವುದಿಲ್ಲ. ಆದುದರಿಂದ 5.00 ಕೋಟಿ ರೂ.ಗಳನ್ನು ಕೆ.ಎಸ್.ಐ.ಡಿ.ಸಿ. ಗೆ ಹಿಂದಿರುಗಿಸುವ ಅಗತ್ಯತೆ ಇಲ್ಲ.

ಮುಂದುವರಿದು ರಾಜ್ಯ ಸರ್ಕಾರವು 2005-06ನೇ ಸಾಲಿನ ಪೂರಕ ಅನುದಾನ (ಮೊದಲನೆ ಕಂತು) ದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಗೆ ಸಾಲವಾಗಿ 1602.27 ಲಕ್ಷ ರೂ.ಗಳನ್ನು ಒದಗಿಸಿದೆ. ಈಗಾಗಲೇ 552.27 ಲಕ್ಷ ರೂ.ಗಳನ್ನು ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಕಾರ್ಖಾನೆಗೆ ಬಿಡುಗಡೆ ಮಾಡಲಾಗಿದೆ. 2005-06ನೇ ಸಾಲಿನ ಕಬ್ಬು ಅರೆಯುವ ಕಾರ್ಯ ಮುಂದುವರಿಸುವ ಸಲುವಾಗಿ ಪೂರಕ ಅನುದಾನದಲ್ಲಿ ಒದಗಿಸಿರುವ ಹಣದಲ್ಲಿ 5.00 ಕೋಟಿ ರೂ.ಗಳನ್ನು ಕಾರ್ಖಾನೆಗೆ ಸಾಲವಾಗಿ ತಕ್ಷಣ ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 153 ಎಸ್‌ಜಿಎಫ್ 2005, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ ಮಂಡ್ಯ ಈ ಕಾರ್ಖಾನೆಗೆ 2005-06ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಗಳನ್ನು ಮುಂದುವರಿಸುವ ಸಲುವಾಗಿ ದುಡಿಯುವ ಬಂಡವಾಳವಾಗಿ ರೂ.5.00 ಕೋಟಿಗಳನ್ನು (ಐದು ಕೋಟಿ ರೂ.ಗಳು ಮಾತ್ರ) ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಈ ಹಣದಲ್ಲಿ ಕಾರ್ಖಾನೆಯ ಕಾರ್ಮಿಕರ ಫೆಬ್ರವರಿ 2005ರ ವೇತನಕ್ಕಾಗಿ ರೂ.1.00 ಕೋಟಿಗಳನ್ನು ಉಪಯೋಗಿಸಿಕೊಳ್ಳಲು ಆದೇಶಿಸಲಾಗಿದೆ.

2005-06ನೇ ಸಾಲಿನ ಆಯವ್ಯಯದಲ್ಲಿ ಯಾವುದೇ ಹಣವನ್ನು ಈ ಕಾರ್ಯಕ್ರಮಕ್ಕಾಗಿ ನಿಗದಿಪಡಿಸಿಲ್ಲದ ಕಾರಣ ಈ ಹಣವನ್ನು 2005-06ನೇ ಸಾಲಿನ ಪೂರಕ ಅನುದಾನ (ಮೊದಲನೆ ಕಂತು) ದಲ್ಲಿ ಒದಗಿಸಲಾಗಿದ್ದು ಲೆಕ್ಕ ಶೀರ್ಷಿಕೆ 6860-04-190-2-01 (ಯೋಜನೆ) "ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ" -395- "ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು" ರಡಿಯಲ್ಲಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಸರ್ಕಾರದ ಉಪಕಾರ್ಯದರ್ಶಿ (ರೇಷ್ಮೆ ಮತ್ತು ಸಕ್ಕರೆ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಸದರಿ ಸಾಲದ ಹಣದ ಮರುಪಾವತಿ ಹಾಗೂ ಇನ್ನಿತರೇ ಅಂಶಗಳು, ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ನಂತರ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ.1411 ವೆಚ್ಚ-1/2005 ದಿನಾಂಕ: 24.08.2005ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ್ ಕುಮಾರ್**

ಪಿ.ಆರ್. 1206 ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ತಿದ್ದುಪಡಿ**

**ಸಂಖ್ಯೆ: ಸಿಐ 153 ಎಸ್‌ಜಿಎಫ್ 2005, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2005**

ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ, ಮಂಡ್ಯ, ಈ ಕಾರ್ಖಾನೆಯ ಪುನರುಜ್ಜೀವನಗೊಳಿಸುವ ಉದ್ದೇಶದಿಂದ 2005-06ನೇ ಸಾಲಿನ ಕಬ್ಬು ಅರೆಯುವ ಕಾರ್ಯ ಮುಂದುವರಿಸುವ ಸಲುವಾಗಿ ದುಡಿಯುವ ಬಂಡವಾಳವಾಗಿ ಸರ್ಕಾರದಿಂದ ರೂ.5.00 ಕೋಟಿಗಳ (ರೂ. ಐದು ಕೋಟಿ ಮಾತ್ರ) ಆರ್ಥಿಕ ನೆರವನ್ನು ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾದ ಸರ್ಕಾರದ ಆದೇಶ ಸಂಖ್ಯೆ: ಸಿಐ 153 ಎಸ್‌ಜಿಎಫ್ 2005 ದಿನಾಂಕ: 24.08.2005ರ ಆದೇಶದ ಭಾಗದ ಕಂಡಿಕೆ 3 ರಲ್ಲಿ ಹೇಳಲಾಗಿರುವ "ಹಣ ಸೆಳೆಯುವ ಬಿಲ್ಲನ್ನು ಸರ್ಕಾರದ ಉಪ ಕಾರ್ಯದರ್ಶಿ (ರೇಷ್ಮೆ ಮತ್ತು ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು" ಎಂಬುದನ್ನು "ಹಣ

ಸೆಳೆಯುವ ಬಿಲ್ಲನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ್ ಕುಮಾರ್**

ಪಿ.ಆರ್. 1207 ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರ ಇಲಾಖೆಯ ನೌಕರರನ್ನು ಕರ್ನಾಟಕ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಆಯೋಗ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕರಾಆ.ಆಡಳಿತ.50.2001-02, ದಿನಾಂಕ: 25.5.2004.
2) ಅಧ್ಯಕ್ಷರು, ಕರ್ನಾಟಕ ರಾಜ್ಯ ಆಯೋಗ, ಬೆಂಗಳೂರು, ಇವರ ಅ.ಸ. ಪತ್ರ ಸಂಖ್ಯೆ: ಕರಾಆ/ಆಡಳಿತ/40/2003-04, ದಿನಾಂಕ: 30.9.2004.
3) ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಆಯೋಗ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕರಾಆ.ಆಡಳಿತ.50.2001-02, ದಿನಾಂಕ: 20.10.2004.
4) ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು, ಇವರು ಪತ್ರ ಸಂಖ್ಯೆ: ಸಿ.ಎಫ್.ಎಸ್/ಇಎಸ್‌ಟಿ/(1)16.2004-05, ದಿನಾಂಕ: 4.5.2004 ಮತ್ತು 18.12.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಯವರ ಪತ್ರದಲ್ಲಿ ಕರ್ನಾಟಕ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ಹಲವಾರು ವರ್ಷಗಳಿಂದ ಎರವಲು ಸೇವೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಬಿ.ವಿ. ಸ್ವರ್ಣಪ್ರೇಮಕುಮಾರಿ, ಶಿರಸ್ತೇದಾರರು, ಶ್ರೀ ಎ.ಹೆಚ್. ಬಿಜಾಪುರ, ಶಿರಸ್ತೇದಾರರು, ಮತ್ತು ಶ್ರೀಮತಿ ಎಂ.ಎಸ್. ರೇಖಾ, ಶೀಘ್ರಲಿಪಿಗಾರರು ಇವರುಗಳು ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಯ ಕಾರ್ಯನಿರ್ವಹಣೆಯ ಬಗ್ಗೆ ಹೆಚ್ಚು ಅನುಭವ ಹೊಂದಿದ್ದು ಇವರುಗಳನ್ನು ಮಾತ್ರ ಇಲಾಖೆಗೆ ಹಿಂದಿರುಗಿಸದೆ ಸಾರ್ವಜನಿಕ ಹಿತದೃಷ್ಟಿಯಿಂದ ಖಾಯಂ ಆಗಿ ಕರ್ನಾಟಕ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ವಿಲೀನಗೊಳಿಸಲು ಸೂಕ್ತ ಆದೇಶ ಹೊರಡಿಸಬೇಕಾಗಿ ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಅಧ್ಯಕ್ಷರು, ಕರ್ನಾಟಕ ರಾಜ್ಯ ಆಯೋಗ, ಇವರ ಅ.ಸ.ಪತ್ರದಲ್ಲಿ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ನೌಕರರಾದ ಶ್ರೀ ಹೆಚ್. ಚಂದ್ರಶೇಖರಯ್ಯ, ಶಿರಸ್ತೇದಾರ್ ಇವರ ಸೇವೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ರಾಜ್ಯ ಆಯೋಗದಲ್ಲಿ ವಿಲೀನಗೊಳಿಸಲು ಆದೇಶ ಹೊರಡಿಸಬೇಕಾಗಿ ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಆಯೋಗ, ಇವರ ಪತ್ರದಲ್ಲಿ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರಾದ ಶ್ರೀಮತಿ ಮೀನಾಕ್ಷಿ, ಇವರು ಜಿಲ್ಲಾ ವೇದಿಕೆಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದ್ದು, ಇವರ ಸೇವೆಯು ರಾಜ್ಯ ಆಯೋಗಕ್ಕೆ ಅತ್ಯವಶ್ಯಕವಾಗಿರುವುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ವಿಲೀನಗೊಳಿಸಲು ಕೋರಿರುತ್ತಾರೆ.

ಮೇಲೆ (4) ರಲ್ಲಿ ಓದಲಾದ ದಿನಾಂಕ: 4.5.2004ರ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು, ಇವರ ಪತ್ರದಲ್ಲಿ ಶ್ರೀಮತಿ ಸ್ವರ್ಣಪ್ರೇಮಕುಮಾರಿ, ಶ್ರೀ ಎ.ಹೆಚ್. ಬಿಜಾಪುರ, ಶ್ರೀಮತಿ ಎಂ.ಎಸ್. ರೇಖಾ ಮತ್ತು ಶ್ರೀಮತಿ ಮೀನಾಕ್ಷಿ ಇವರುಗಳು ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳಲ್ಲಿ ವಿಲೀನಗೊಳ್ಳಲು ಅಭಿಮತ ವ್ಯಕ್ತಪಡಿಸಿರುವುದರಿಂದ ಇವರುಗಳ ಸೇವೆಯನ್ನು ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳಲ್ಲಿ ವಿಲೀನಗೊಳಿಸಲು ಸಹಮತಿ ಇರುತ್ತದೆಂದು ತಿಳಿಸಿರುತ್ತಾರೆ. ಅಲ್ಲದೆ ದಿನಾಂಕ: 18.12.2004ರ ಪತ್ರದಲ್ಲಿ ಶ್ರೀ ಚಂದ್ರಶೇಖರಯ್ಯ, ಶಿರಸ್ತೇದಾರ್, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಿಂದ ಸಾರ್ವಜನಿಕ ಹಿತದೃಷ್ಟಿಯಿಂದ ರಾಜ್ಯ ಆಯೋಗದಲ್ಲಿ ವಿಲೀನಗೊಳ್ಳಲು ಇಚ್ಛಿಸಿರುವುದರಿಂದ ಅವರ ಕೋರಿಕೆಯನ್ನು ಪರಿಗಣಿಸಿ ಸಹಮತಿ ನೀಡಿರುವುದಾಗಿ ವರದಿ ಮಾಡಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅನಾಸ 136 ಸಲಫ 2003, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ, ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16(ಎ) (ii) ರನ್ವಯ ಸಾರ್ವಜನಿಕ ಹಿತದೃಷ್ಟಿಯಿಂದ ಈ ಕೆಳಕಂಡ ನೌಕರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಯ ಸಮಾನ ಹುದ್ದೆಗಳಿಗೆ ವಿಲೀನಗೊಳಿಸಲು ಆದೇಶಿಸಿದೆ.

1) ಶ್ರೀ ಹೆಚ್.ಆರ್. ಚಂದ್ರಶೇಖರಯ್ಯ, ಶಿರಸ್ತೇದಾರರು, ರಾಜ್ಯ ಆಯೋಗ, ಬಸವ ಭವನ, ಬೆಂಗಳೂರು.
2) ಶ್ರೀಮತಿ ಸ್ವರ್ಣಪ್ರೇಮಕುಮಾರಿ, ಶಿರಸ್ತೇದಾರರು, ಜಿಲ್ಲಾ ಗ್ರಾಹಕರ ವೇದಿಕೆ, ಶಿವಮೊಗ್ಗ.
3) ಶ್ರೀ ಎ.ಹೆಚ್. ಬಿಜಾಪುರ, ಶಿರಸ್ತೇದಾರರು, ಜಿಲ್ಲಾ ಗ್ರಾಹಕರ ವೇದಿಕೆ, ಗುಲ್ಬರ್ಗಾ.
4) ಶ್ರೀಮತಿ ಎಂ.ಎಸ್. ರೇಖಾ, ಶೀಘ್ರಲಿಪಿಗಾರರು, ಜಿಲ್ಲಾ ಗ್ರಾಹಕರ ವೇದಿಕೆ, ಮಂಡ್ಯ.
5) ಶ್ರೀಮತಿ ಮೀನಾಕ್ಷಿ, ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾ ಗ್ರಾಹಕರ ವೇದಿಕೆ, ಬೆಂಗಳೂರು ನಗರ, ಕಾವೇರಿ ಭವನ, ಬೆಂಗಳೂರು.

ಈ ನೌಕರರುಗಳನ್ನು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ವಿಲೀನಗೊಳಿಸಿರುವುದರಿಂದ ಇವರುಗಳ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 6ರ ಎರಡನೇ ಪರಂತುಕದನುಸಾರ ನಿರ್ಧರಿಸತಕ್ಕದ್ದು.

ಈ ನೌಕರರುಗಳು ಈ ಕೆಳಕಂಡ ಷರತ್ತುಗಳನ್ನು ಪಾಲಿಸತಕ್ಕದ್ದು.

1) ವರ್ಗಾವಣೆ ಮೂಲಕ ರಾಜ್ಯ ಆಯೋಗದಲ್ಲಿ ವಿಲೀನಗೊಳಿಸಿದ ಈ ನೌಕರರುಗಳನ್ನು ಸೇವಾವಧಿಯಲ್ಲಿ ಒಮ್ಮೆ ಮಾತ್ರ ಮಾಡತಕ್ಕದ್ದು. ಯಾವುದೇ ಕಾರಣಕ್ಕೂ ಪುನಃ ಪರಿಗಣಿಸತಕ್ಕದ್ದಲ್ಲ.

2) ಈ ನೌಕರರು ವರ್ಗಾವಣೆ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 1208 ಪೀಠಾಧಿಕಾರಿ (ಪ್ರಭಾರ), ಆಹಾರ-3 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕೆ. ಸಾಹೇಬಗೌಡ, ಹಿಂದಿನ ತಹಶೀಲ್ದಾರ್, ಜೇವರ್ಗಿ ಮತ್ತಿತರರ ವಿರುದ್ಧದ ಇಲಾಖಾ ವಿಚಾರಣೆ - ಶ್ರೀ ಹೆಚ್.ಸಿ. ನಿಂಗನೂರು, ಶಿರಸ್ತೇದಾರ್ ಮತ್ತು ಶ್ರೀ ಚಂದ್ರಶೇಖರ ತಂಬಾಕೆ, ದ್ವಿತೀಯ ದರ್ಜೆ ಸಹಾಯಕ ಇವರುಗಳನ್ನು ಆರೋಪ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಂಇ 34 ಎಡಿಇ 2002, ದಿನಾಂಕ: 29.05.2004.
2) ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ: 24.1.2005ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕಿನ ಗುಳಿಹಾಳ-ಡಿ ಗ್ರಾಮದ ಸರ್ವೆ ನಂ.10 ಮತ್ತು 11 ಗಳಲ್ಲಿಯ ಭೂನ್ಯಾಯ ಮಂಡಳಿ, ಜೇವರ್ಗಿಯ ಆದೇಶಕ್ಕೆ ವ್ಯತಿರಿಕ್ತವಾಗಿ ಕ್ರಮ ತೆಗೆದುಕೊಂಡ ಹಿಂದಿನ ತಹಸೀಲ್ದಾರ್ ಶ್ರೀ ಕೆ. ಸಾಹೇಬಗೌಡ, ಶಿರಸ್ತೇದಾರ್ ಶ್ರೀ ಹೆಚ್.ಸಿ. ನಿಂಗನೂರ ಹಾಗೂ ವಿಷಯ ನಿರ್ವಾಹಕ ಶ್ರೀ ಚಂದ್ರಶೇಖರ ತಂಬಾಕೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 29.5.2004ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಿ, ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 24.01.2005 ರಂದು ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಅದರಲ್ಲಿ ಶ್ರೀ ಕೆ. ಸಾಹೇಬಗೌಡ, ನಿವೃತ್ತ ತಹಸೀಲ್ದಾರ್ ಇವರ ವಿರುದ್ಧ ಹೊರಿಸಲಾದ ಆರೋಪ ಸಾಬೀತಾಗಿದೆಯೆಂದು ಹಾಗೂ ಶ್ರೀ ಹೆಚ್.ಸಿ. ನಿಂಗನೂರು, ಶಿರಸ್ತೇದಾರ್ ಮತ್ತು ಶ್ರೀ ಚಂದ್ರಶೇಖರ್ ತಂಬಾಕೆ, ದ್ವಿತೀಯ ದರ್ಜೆ ಸಹಾಯಕ ಇವರುಗಳ ವಿರುದ್ಧ ಹೊರಿಸಲಾದ ಕರ್ತವ್ಯಲೋಪಗಳನ್ನೊಳಗೊಂಡ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಶ್ರೀ ಕೆ. ಸಾಹೇಬಗೌಡ, ನಿವೃತ್ತ ತಹಸೀಲ್ದಾರ್ ಇವರಿಗೆ ದಂಡನೆ ವಿಧಿಸುವ ಬಗ್ಗೆ ಪ್ರತ್ಯೇಕವಾಗಿ ಕ್ರಮ ಜರುಗಿಸಲಾಗುತ್ತಿದೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಶ್ರೀ ಹೆಚ್.ಸಿ. ನಿಂಗನೂರು, ಶಿರಸ್ತೇದಾರ್ ಮತ್ತು ಶ್ರೀ ಚಂದ್ರಶೇಖರ್ ತಂಬಾಕೆ, ದ್ವಿತೀಯ ದರ್ಜೆ ಸಹಾಯಕ ಇವರುಗಳ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಇವರುಗಳನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 34 ಎಡಿಇ 2002, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಹೆಚ್.ಸಿ. ನಿಂಗನೂರು, ಶಿರಸ್ತೇದಾರ್ ಮತ್ತು ಶ್ರೀ ಚಂದ್ರಶೇಖರ್ ತಂಬಾಕೆ, ದ್ವಿತೀಯ ದರ್ಜೆ ಸಹಾಯಕ ಇವರುಗಳ ವಿರುದ್ಧ ದಿನಾಂಕ: 29.5.2004ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 34 ಎಡಿಇ 2002 ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಲಾಗಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ, ಶ್ರೀ ಹೆಚ್.ಸಿ. ನಿಂಗನೂರು, ಶಿರಸ್ತೇದಾರ್ ಮತ್ತು ಶ್ರೀ ಚಂದ್ರಶೇಖರ್ ತಂಬಾಕೆ, ದ್ವಿತೀಯ ದರ್ಜೆ ಸಹಾಯಕ ಇವರುಗಳ ವಿರುದ್ಧ ಈ ಜಂಟಿ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರುಗಳು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 1210 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ. (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ಮೂಡಬಿದ್ರೆಯ ಆಳ್ವಾಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1) ದಿನಾಂಕ: 27.12.2003ರ ಸಂಖ್ಯೆ: ಯುಆರ್‌ಸಿ 2003ರ ಸರ್ಕಾರಿ ಆದೇಶ.
2) ದಿನಾಂಕ: 20.04.2005 ಸಂಖ್ಯೆ: F.SRO/NCTE/B.P.Ed/2005-06/509ರ/ NCTE ಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿನಾಂಕ: 24.06.2005ರ ಎಇಟಿ/ಓಸಿ/2005/ಎಓ/107ರ ಆಳ್ವಾಸ್ ಎಜುಕೇಷನ್ ಫೌಂಡೇಷನ್‌ನ ಅಧ್ಯಕ್ಷರ ಪತ್ರ.
4) ದಿನಾಂಕ: 27.07.2005ರ ಸಂಖ್ಯೆ: ಎಂ.ಯು/ಎಸಿಸಿ/ಎಎಫ್‌ಎಫ್/109/2004-05/ಎ1ರ ಮಂಗಳೂರು ವಿಶ್ವವಿದ್ಯಾಲಯದ ಕುಲಸಚಿವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಮೂಡಬಿದ್ರೆಯ ಆಳ್ವಾಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 20.04.2005ರ ಆದೇಶದಲ್ಲಿ ಎನ್‌ಸಿಟಿಇಯು ಮೂಡಬಿದ್ರೆಯ ಆಳ್ವಾಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ಪತ್ರದಲ್ಲಿ ಆಳ್ವಾಸ್ ಎಜುಕೇಷನ್ ಫೌಂಡೇಷನ್‌ನ ಅಧ್ಯಕ್ಷರು ಆಳ್ವಾಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನಲ್ಲಿ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4) ರಲ್ಲಿರುವ ಪತ್ರದಲ್ಲಿ ಮಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಮೂಡಬಿದ್ರೆಯ ಆಳ್ವಾಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 123 ಯುಆರ್‌ಸಿ 2005 (ಭಾಗ-2), ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2005**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೂಡಬಿದ್ರೆಯ ಆಳ್ವಾಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್. 1224 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ಹುಮನಾಬಾದ್‌ನ ಡಾ: ಬಿ.ಆರ್. ಅಂಬೇಡ್ಕರ್ ಬಿ.ಪಿ.ಎಡ್ ಕಾಲೇಜಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1) ದಿನಾಂಕ: 29.12.2003ರ ಸಂಖ್ಯೆ: ಇಡಿ 243 ಯುಜಿವಿ 2003ರ ಸರ್ಕಾರಿ ಆದೇಶ.
2) ದಿನಾಂಕ: 29.06.2005 ಸಂಖ್ಯೆ: F.SRO/NCTE/B.P.Ed/2005-06/540ರ/NCTE ಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿನಾಂಕ: 21.04.2005ರ ಡಾ: ಎಸ್. ರಾಧಾಕೃಷ್ಣನ್ ಶಿಕ್ಷಣ ಸಂಸ್ಥೆಯ ಅಧ್ಯಕ್ಷರ ಪತ್ರ.
4) ದಿನಾಂಕ: 23.10.2003ರ ಸಂಖ್ಯೆ: ಜಿಯುಜಿ/ಎಸಿಎ/ಎಎಫ್ಎಫ್ಎನ್-3/2003-04/1315ರ ಗುಲ್ಬರ್ಗಾ ವಿಶ್ವವಿದ್ಯಾಲಯದ ಕುಲಸಚಿವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಹುಮನಾಬಾದ್‌ನ ಡಾ: ಬಿ.ಆರ್. ಅಂಬೇಡ್ಕರ್ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 21.04.2005ರ ಆದೇಶದಲ್ಲಿ ಎನ್‌ಸಿಟಿಇಯು ಹುಮನಾಬಾದ್‌ನ ಡಾ: ಬಿ.ಆರ್. ಅಂಬೇಡ್ಕರ್ ಬಿ.ಪಿ.ಎಡ್ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ಪತ್ರದಲ್ಲಿ ಡಾ: ಎಸ್. ರಾಧಾಕೃಷ್ಣನ್ ಶಿಕ್ಷಣ ಸಂಸ್ಥೆಯ ಅಧ್ಯಕ್ಷರು ಡಾ: ಬಿ.ಆರ್. ಅಂಬೇಡ್ಕರ್ ಬಿ.ಪಿ.ಎಡ್ ಕಾಲೇಜಿನಲ್ಲಿ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4) ರಲ್ಲಿರುವ ಪತ್ರದಲ್ಲಿ ಗುಲ್ಬರ್ಗಾ ವಿಶ್ವವಿದ್ಯಾಲಯದ ಕುಲಸಚಿವರು ಹುಮನಾಬಾದ್‌ನ ಡಾ: ಬಿ.ಆರ್. ಅಂಬೇಡ್ಕರ್ ಬಿ.ಪಿ.ಎಡ್ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 46 ಯುಜಿವಿ 2005, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2005**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹುಮನಾಬಾದ್‌ನ ಡಾ: ಬಿ.ಆರ್. ಅಂಬೇಡ್ಕರ್ ಬಿ.ಪಿ.ಎಡ್ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್. 1225 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

## HEALTH & FAMILY WELFARE SECRETARIAT

**Subject:** Reemployment of Retired Professors, Assistant Professors and Lecturers of Government Medical Colleges.

**Read:** (1) G.O.No.HFW 183 HSH 2002, dated. 06/05/2002.
(2) Notification No. MCI /12 (2)/2004/32371, dated.15/03/2005 of the Medical Council of India.

**PREAMBLE:**

1. A large number of vacancies are occurring in the cadre of Professors and Assistant Professors in the year 2005-2006 due to substantial retirements. The vacancies in the cadre of Professors and Assistant Professors will be filled up by promotion from the feeding cadres of Assistant Professors and Lecturers respectively as such a large number of consequential vacancies will arise in the cadre of Assistant Professors and Lecturers.

2. At present appointment to the post of Professors, Assistant Professors and Lecturers is made in accordance with the Karnataka Health and Family Welfare Department (Collegiate Branch) (Recruitment) Rules, 1967. If eligible candidates are not available for promotion and direct recruitment to the post of Lecturers such vacancies are being filled as a stopgap measure by employing the retired personnel on contract for a period of 11 months renewable with a break of 1 day until the attainment of 62 years of age against existing vacancies of the post of Professors, Assistant Professors and Lecturers subject to possessing the minimum academic qualification and teaching experience as prescribed in the MCI Minimum Qualification for Teachers in Medical Institutions Regulations, 1998. The consolidated salary admissible to such reemployed person is Rs.16,200 for Professors, Rs.11,800/- for Assistant Professors and Rs.7,800/- for Lecturers. However, it became difficult to appoint the retired teachers of Government Medical Colleges as the Private Medical Colleges offer lucrative salaries. Therefore, it became expedient to revise the consolidated salary payable to such retired persons appointed on contractual reemployment and also to extend the period of contractual appointment from 11 months to 2 years at a stretch and also to extend the tenure of reemployment with a break of 1 day until the attainment of 65 years of age in terms of MCI Minimum Qualifications for Teachers in Medical Institutions (Amendment) Regulations, 2004 published in the MCI Notification dated. 15.03.2005.

3. Revision of scheme of contractual reemployment of retired Professors, Assistant Professors and Lecturers of Government Medical Colleges have been considered from all angles. Applying the MCI Minimum Qualifications for teachers in Medical Institutions (Amendment) Regulations, 2004 it became expedient to lay down the scheme of reemployment on contract of retired Professors, Assistant Professors and Lecturers.

**GOVERNMENT ORDER NO. HFW 41 MMC 2005, BANGALORE, DATED 1st SEPTEMBER 2005.**

4. Sanction is accorded for reemployment of retired Professors, Assistant Professors and Lecturers of Government Medical Colleges on contract under rule 15 of the Karnataka Civil Services (General Recruitment) Rules, 1977 in Government Medical Colleges subject to the following stipulations.

(1) The contractual reemployment of such retired Professors, Assistant Professors and Lecturers of Government Medical Colleges shall be initially for a period of two years after their retirement.

(2) Such reemployment will be after two days from the date of retirement.

(3) Such a employed Professors, Assistant Professors and Lecturers shall be eligible for further continuance until the attainment of 65th year of age. Continuance of such a reemployment shall be after a break of two days after the expiry of the first tenure of reemployment.

(4) They shall be physically fit to discharge their duties and perform their functions of the respective post in which reemployed.

(5) During the contractual reemployment they shall be paid the consolidated salary of Rs.20,000/- (Rupees Twenty Thousand only) for Professors, Rs.15,000/- (Rupees Fifteen Thousand only) for Assistant Professors and Rs.12,000/- (Rupees Twelve Thousand only) for Lecturers per month without reference to their pension.

(6) They shall possess the minimum qualification prescribed in the MCI Minimum Qualifications for Teachers in Medical Institutions Regulations, 1998.

(7) Such of the Professors, Assistant Professors and Lecturers of the Government Medical Colleges reemployed on contract if so desired are entitled to apply for termination of their contractual reemployment by issue of a notice of not less than one month in writing through the Principal of the college in which they are reemployed.

(8) Such of the contractually reemployed Professors, Assistant Professors and Lecturers of Government Medical College are liable for termination of their contractual reemployment at any time without any notice by the Principal of the concerned Government College, when their services are no longer required or regular recruitment is made or promotions are given against the post held by them.

5. Such contractual reemployment shall be made only when recruitment to such post would involve delay and in the event of lack of qualified candidates for promotion or direct recruitment as the case may be.

6. The terms and conditions of contractual reemployment shall be as specified in the Annexure-1, 2 and 3.

7. The selection of suitable candidate shall be by a committee consisting of the following.

| | | |
|---|---|---|
| (1) | Secretary to Government, Health & Family Welfare Department (Medical Education). | - Chairman. |
| (2) | Director of Medical Education. | - Member. |
| (3) | Principal, Bangalore Medical College. | - Member. |
| (4) | Principal, Mysore Medical College. | - Member. |
| (5) | Principal, Karnataka Institute of Medical Sciences. | - Member. |
| (6) | Principal, Vijayanagara Institute of Medical College. | - Member. |
| (7) | Joint Secretary / Deputy Secretary to Government, Health & Family Welfare Department (Medical Education). | - Member. |
| (8) | Chief Administrative Officer in the Directorate of Medical Education. | - Member Secretary. |

8. This orders shall come in to force with effect from 1$^{st}$ September 2005.

9. This order issues with the concurrence of DPAR and FD vide U.O.Note No. FD 526 EXP(5) 2005 dtd.06.05.2005 and DPAR 1018 SRA 2005, dtd. 30.06.2005.

By Order and in the Name of the Governor of Karnataka,

**K.V. NANJUNDEGOWDA**

Joint Secretary to Government,

Health & Family Welfare Department, (Medical Education)

ಅನುಬಂಧ-1

**HFW 41 MMC 2005**

**ಗುತ್ತಿಗೆ ಆಧಾರದ ಮರು ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳು**

(1) - - - - - - -ವೈದ್ಯಕೀಯ ಕಾಲೇಜಿನ - - - - - -ಪ್ರಾಧ್ಯಾಪಕ ಹುದ್ದೆಯಲ್ಲಿ ಗುತ್ತಿಗೆ ಮೇಲೆ ನೇಮಕಗೊಂಡಿರುವ ಡಾಃ--------------------- ರವರ ಗುತ್ತಿಗೆ ನೇಮಕಾತಿ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.

(2) ಡಾ.…………………… ರವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 20,000/- ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿ ಭತ್ಯೆ ಮಾತ್ರ ಪಡೆಯಲು ಅರ್ಹರಿರುತ್ತಾರೆಯೇ ವಿನಃ ಬೇರೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ.

(3) ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

(4) ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ಸ್. ನಿಯಮ 150 ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.

(5) ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ , ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.

(6) ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ದರಾಗಿರತಕ್ಕದ್ದು.

(7) ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

(8) ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.

(9) ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು, ಕಟ್ಟುನಿಟ್ಟಾಗಿ ಪಾಲಿಸಬೇಕು.

(10) 1966 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.

(11) ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

(12) ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.

(13) ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

## ಅನುಬಂಧ- 2

## ಗುತ್ತಿಗೆ ಆಧಾರದ ಮರು ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳು

(1) - - - - - - - - - - ವೈದ್ಯಕೀಯ ಕಾಲೇಜಿನ - - - - - -ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಗುತ್ತಿಗೆ ಮೇಲೆ ನೇಮಕಗೊಂಡಿರುವ ಡಾ:--------------------- ರವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ……………… ರಿಂದ …………………... ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.

(2) ಡಾ. …………………… ರವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 15,000/- ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿ ಭತ್ಯೆ ಮಾತ್ರ ಪಡೆಯಲು ಅರ್ಹರಿರುತ್ತಾರೆಯೇ ವಿನಃ ಬೇರೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ.

(3) ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

(4) ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ಸ್. ನಿಯಮ 150 ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.

(5) ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ , ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.

(6) ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.

(7) ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

(8) ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.

(9) ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು, ಕಟ್ಟುನಿಟ್ಟಾಗಿ ಪಾಲಿಸಬೇಕು.

(10) 1966 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.

(11) ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

(12) ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.

(13) ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

## ಅನುಬಂಧ-3

## ಗುತ್ತಿಗೆ ಆಧಾರದ ಮರು ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳು

(1) - - - - - - - - - ವೈದ್ಯಕೀಯ ಕಾಲೇಜಿನ - - - - - -ಉಪನ್ಯಾಸಕ ಹುದ್ದೆಯಲ್ಲಿ ಗುತ್ತಿಗೆ ಮೇಲೆ ನೇಮಕಗೊಂಡಿರುವ ಡಾ:--- ------------------ ರವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ……………… ರಿಂದ …………………... ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.

(2) ಡಾ. …………………… ರವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 12,000/- ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿ ಭತ್ಯೆ ಮಾತ್ರ ಪಡೆಯಲು ಅರ್ಹರಿರುತ್ತಾರೆಯೇ ವಿನಃ ಬೇರೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ.

(3) ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

(4) ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ಸ್. ನಿಯಮ 150 ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.

(5) ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ , ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.

(6) ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.

(7) ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

(8) ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.

(9) ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.

(10) 1966 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.

(11) ಈ ಒಪ್ಪಂದದ ಷರತ್ತುಗ್ಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

(12) ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.

(13) ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ದ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**K.V. NANJUNDEGOWDA**
Joint Secretary to Government,
Health & Family Welfare Department, (Medical Education)

P.R. 1259

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇದರ 2005-06ನೇ ಸಾಲಿನ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರೂ.25.00 ಲಕ್ಷಗಳನ್ನು ಮಂಜೂರು ಮಾಡಿ ಬಿಡುಗಡೆಗೊಳಿಸುವ ಕುರಿತು.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿ/ಕೆಎಸ್‌ಐ/24/ 2001-02, ದಿನಾಂಕ: 25.05.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆಯು ಈ ಕೆಳಕಂಡ ಜಮೀನುಗಳನ್ನು ಹೊಂದಿದ್ದು

1. ಝೂಡ್‌ಶಹಾಪೂರ-24 ಎಕರೆ-7 ಗುಂಟೆ (ರಾಷ್ಟ್ರೀಯ ಹೆದ್ದಾರಿ ಮೇಲೆ)
2. ಬೆಳಗಾಂ 3 ಎಕರೆ 32 ಗುಂಟೆ
3. ಬೆನಕನಹಳ್ಳಿ 45 ಎಕರೆ 28 ಗುಂಟೆ
4. ಬೆಳಗುಂದಿ 37 ಎಕರೆ 21 ಗುಂಟೆ

ಇವುಗಳಲ್ಲಿ ಕ್ರಮ ಸಂಖ್ಯೆ: 1 ರಲ್ಲಿ ಭೂ ಅಭಿವೃದ್ಧಿ ಕೆಲಸ, ಕಬ್ಬು ನಾಟಿ ಮಾಡುವ ಕೆಲಸ ಜಾರಿಯಲ್ಲಿದ್ದು ಇದಕ್ಕಾಗಿ ರೂ.12.88 ಲಕ್ಷ ಮತ್ತು ಕ್ರಮ ಸಂಖ್ಯೆ: 2,3 ಮತ್ತು 4 ರಲ್ಲಿ ತೋರಿಸಿರುವ ಜಮೀನುಗಳಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜರುಗಿಸಿ ಅಲ್ಲಿ ಹೊಸತಳಿ ಕಬ್ಬು ಬೀಜ ಉತ್ಪತ್ತಿ ಮಾಡಬೇಕಿದ್ದು ಇದಕ್ಕೆ ಅಂದಾಜು ರೂ.18.75 ಲಕ್ಷ ಮತ್ತು ಸಕ್ಕರೆ ಸಂಸ್ಥೆಯ ಆಡಳಿತ ನಡೆಸಲು ಆಡಳಿತಾತ್ಮಕ ವೆಚ್ಚ ರೂ.34.00 ಲಕ್ಷಗಳು ಒಟ್ಟಾರೆಯಾಗಿ ರೂ.65.63 ಲಕ್ಷಗಳು ಅವಶ್ಯಕತೆ ಇದೆ ಎಂದು ತಿಳಿಸಿ, ಸರ್ಕಾರವು 2005-06ನೇ ಸಾಲಿನ ಅನುದಾನದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಗೆ ಸಕ್ಕರೆ ನಿರ್ದೇಶನಾಲಯದ ಮುಖಾಂತರ ರೂ.50.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ: 2852-08-201-0-01 ರಡಿಯಲ್ಲಿ ನಿಗದಿಗೊಳಿಸಲಾಗಿದ್ದು, ಸದರಿ ಹಣವನ್ನು ಮಂಜೂರು ಮಾಡಿ ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿದ್ದಾರೆ.

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ದಿನಾಂಕ: 25.05.2005ರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 154 ಎಸ್‌ಜಿಎಫ್ 2005, ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2005**

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ರವರು ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ, ಇದಕ್ಕೆ 2005-06ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852-08-201-0-01 ರಡಿಯಲ್ಲಿ ಒದಗಿಸಿರುವ ರೂ.50.00 ಲಕ್ಷ ರೂ.ಗಳಲ್ಲಿ 25 ಲಕ್ಷ ರೂ.ಗಳನ್ನು (ರೂಪಾಯಿಗಳು ಇಪ್ಪತ್ತೈದು ಲಕ್ಷ ಮಾತ್ರ) ಗಳನ್ನು ಅನುದಾನವಾಗಿ ಬಿಡುಗಡೆ ಮಾಡಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಮೇಲು ರುಜು ಪಡೆದು ಸದರಿ ಹಣವನ್ನು ಖಜಾನೆಯಿಂದ ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ-1-ಟಿಎಫ್‌ಪಿ 2003 ದಿನಾಂಕ: 12.06.2003 ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ್‌ಕುಮಾರ್**

ಪಿ.ಆರ್. 1245 ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮ ನಿಯಮಿತದ ಜೂಟು ರೇಷ್ಮೆ ಗಿರಣಿ ಚನ್ನಪಟ್ಟಣ ಘಟಕ ಪುನಃಶ್ಚೇತನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಡಿಡಿಪೀಆರ್ 61 ಎಆರ್‌ಯು 2004, ದಿನಾಂಕ: 28.8.2003.
2. ಸರ್ಕಾರದ ಪತ್ರ ಸಂಖ್ಯೆ: ಡಿಡಿಪೀಆರ್ 61 ಎಆರ್‌ಯು 2004, ದಿನಾಂಕ: 5.10.2004.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: KSIC/MD/CPT-KKP/2004-05, ದಿನಾಂಕ: 17.1.2005.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಕೆಎಸ್‌ಐಸಿ/ವ್ಯನಿ/ಜೂರೇಗಿ-ಚ/2004-05, ದಿನಾಂಕ: 8.2.2005.
5. ದಿನಾಂಕ: 19.04.2005 ರಂದು ನಡೆದ ಸಚಿವ ಸಂಪುಟ ಉಪ ಸಮಿತಿಯ ತೀರ್ಮಾನ.

**ಪ್ರಸ್ತಾವನೆ:**

ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮ ನಿಯಮಿತವು 1980 ರಲ್ಲಿ ಸ್ಥಾಪಿತವಾಗಿದ್ದು, ಪ್ರಾರಂಭದಿಂದಲೂ ನಷ್ಟವನ್ನು ಅನುಭವಿಸುತ್ತಾ ಬಂದಿರುವ ಹಿನ್ನಲೆಯಲ್ಲಿ ನಿಗಮವನ್ನು 1990 ರಲ್ಲಿ ಬಿ.ಐ.ಎಫ್.ಆರ್. ನಲ್ಲಿ ನೋಂದಾಯಿಸಲಾಯಿತು. ಬಿ.ಐ.ಎಫ್.ಆರ್.ನ ಪುನಃಶ್ಚೇತನ ಯೋಜನೆಯನ್ವಯ ಹಣ ಮರು ಪಾವತಿಗಾಗಿ ಸರ್ಕಾರವು ಹೆಚ್ಚುವರಿ ಬಂಡವಾಳವನ್ನು ನಿಗಮಕ್ಕೆ ಮಂಜೂರು ಮಾಡಿತು. ಆದಾಗ್ಯೂ ನಿಗಮವು ಅಭಿವೃದ್ಧಿ ಹೊಂದಲು ವಿಫಲವಾದ ಹಿನ್ನಲೆಯಲ್ಲಿ ದಿನಾಂಕ: 28.12.2001 ರಲ್ಲಿ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಭೆಯನ್ನು ನಡೆಸಿ, ನಷ್ಟ ಉಂಟು ಮಾಡುತ್ತಿರುವ ನಿಗಮದ ಜೂಟು ರೇಷ್ಮೆ ಘಟಕ, ಚನ್ನಪಟ್ಟಣ ಸಿಲ್ಕ್ ಫಿಲೇಚರ್ ಘಟಕ, ಕನಕಪುರ ಇವುಗಳನ್ನು ಮುಚ್ಚಲು ತೀರ್ಮಾನಿಸಿತು. ಬಿ.ಐ.ಎಫ್.ಆರ್.ನ ಆದೇಶದನ್ವಯ ಮತ್ತು ಸಾರ್ವಜನಿಕ ವಲಯ ಪುನರ್ ಸಂಘಟನಾ ಆಯೋಗದ ಶಿಫಾರಸ್ಸಿನ ಮೇರೆಗೆ ಬಂಡವಾಳ ಹಿಂತೆಗೆತ, ಸಾರ್ವಜನಿಕ ಉದ್ದಿಮೆಗಳ ಸುಧಾರಣಾ ಇಲಾಖೆಯು ಕರ್ನಾಟಕ ರೇಷ್ಮೆ ಉದ್ದಿಮೆಯನ್ನು ಪುನರ್ ಸಂಘಟಿಸಲು ಮತ್ತು ಖಾಸಗೀಕರಣಗೊಳಿಸಲು ತೀರ್ಮಾನಿಸಿ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಈ ಕೆಲವು ನೆರವುಗಳನ್ನು ವಿಸ್ತರಿಸುವುದರೊಂದಿಗೆ ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮವನ್ನು ಖಾಸಗೀಕರಣಗೊಳಿಸಲು ಮತ್ತು ಪುನರ್ ಸಂಘಟನೆ ಪ್ರಸ್ತಾವನೆಯನ್ನು ಜಾರಿಗೊಳಿಸಲು ಸರ್ಕಾರದ ಅನುಮೋದನೆ ನೀಡಲಾಗಿತ್ತು. ಅದರಂತೆ, ಜೂಟು ರೇಷ್ಮೆ ಘಟಕ, ಚನ್ನಪಟ್ಟಣ ಹಾಗೂ ರೇಷ್ಮೆ ನೂಲು ತೆಗೆಯುವ ಘಟಕ, ಕನಕಪುರ ಇವುಗಳನ್ನು ಮುಚ್ಚಿ ಅದರ ನೌಕರರಿಗೆ ಸ್ವಯಂ ನಿವೃತ್ತಿ ನೀಡಿ ಬಿಡುಗಡೆಗೊಳಿಸಲಾಗಿದೆ, ಮತ್ತು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಜೂಟು ರೇಷ್ಮೆ ಘಟಕ, ಚನ್ನಪಟ್ಟಣ, ರೇಷ್ಮೆ ನೂಲು ಘಟಕ, ಕನಕಪುರದ ಸ್ಥಿರ ಮತ್ತು ಚರಾಸ್ಥಿಗಳ ಮಾರಾಟ ಪ್ರಕ್ರಿಯೆ ಕೈಗೊಳ್ಳಲು ಅನುಮೋದನೆ ನೀಡಲಾಗಿದೆ. ಅದರಂತೆ ಸದರಿ ಆಸ್ತಿಯನ್ನು ಮಾರುಕಟ್ಟೆ ದರದಂತೆ ಕೆ.ಎಸ್.ಎಸ್.ಐ.ಡಿ.ಸಿ.ಗೆ ಹಸ್ತಾಂತರಿಸಲು ಮೇಲೆ ಓದಲಾದ ಕ್ರಮಸಂಖ್ಯೆ (3) ರಲ್ಲಿ ನಿಗಮದ ವ್ಯವಸ್ಥಾಪಕರು ಒಂದು ಪ್ರಸ್ತಾವನೆಯನ್ನು ಸಲ್ಲಿಸಿದರು. ಈ ಹಂತದಲ್ಲಿಯೇ ಪುನಃ ಅವರು ಚನ್ನಪಟ್ಟಣ ರೇಷ್ಮೆ ಜೂಟು ಗಿರಣಿಗಳನ್ನು ಪುನಃಶ್ಚೇತನಗೊಳಿಸುವ ಬಗ್ಗೆ ಪ್ರಸ್ತಾವನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಸಲ್ಲಿಸಿದರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಇದನ್ನು ಪುನಃಶ್ಚೇತನಗೊಳಿಸಲು ಸರ್ಕಾರವು ಬಂಡವಾಳ ಹೂಡುವ ಬದಲು ಖಾಸಗಿ ಉದ್ದಿಮೆದಾರರಿಗೆ ನೀಡುವುದು ಸಮಂಜಸವೆಂದು ತೀರ್ಮಾನಿಸಿ ಪ್ರಸ್ತಾವನೆಯನ್ನು ಸಚಿವ ಸಂಪುಟ ಉಪ ಸಮಿತಿಯ ಮುಂದೆ ಇಡಲಾಯಿತು. ಮೇಲೆ ಓದಲಾದ ಕ್ರಮಸಂಖ್ಯೆ (5)ರ ಸಚಿವ ಸಂಪುಟ ಉಪ ಸಮಿತಿ ಸಭೆಯಲ್ಲಿ ಕನಕಪುರ ಘಟಕದ ಆಸ್ತಿಯನ್ನು ಪಾರದರ್ಶಕ ಪ್ರಕ್ರಿಯೆಯನ್ವಯ ಮಾರಾಟ ಮಾಡಿ ಬಂದ ಹಣವನ್ನು ನಿಗಮದ ಬಂಡವಾಳದ ಬೇಡಿಕೆಗೆ ಉಪಯೋಗಿಸಲು ಮತ್ತು ಚನ್ನಪಟ್ಟಣ ಘಟಕವನ್ನು ಪುನಃಶ್ಚೇತನಗೊಳಿಸಲು ಖಾಸಗಿಯವರನ್ನು ಆಹ್ವಾನಿಸಲು ತೀರ್ಮಾನಿಸಲಾಯಿತು. ಈ ತೀರ್ಮಾನದ ಹಿನ್ನಲೆಯಲ್ಲಿ ಈ ಬಗ್ಗೆ ಕ್ರಮದ ಕುರಿತಂತೆ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 56 ರೇಉನಿ 2004, ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2005**

ಕನಕಪುರದ ರೇಷ್ಮೆ ನೂಲು ತೆಗೆಯುವ ಘಟಕದ ಈ ಕೆಳಗಿನ ಆಸ್ತಿಗಳನ್ನು ಪಾರದರ್ಶಕ ಪ್ರಕ್ರಿಯೆಯನ್ವಯ ಮಾರುವುದು, ಮತ್ತು ಒಂದು ಖಾಸಗಿ ಸ್ವತಂತ್ರ ಏಜೆನ್ಸಿಯಿಂದ ಮೌಲ್ಯಮಾಪನ ಮಾಡಿ, ಅದರಂತೆ, ಈ ಕೆಳಗಿನವುಗಳಿಗೆ ಮೌಲ್ಯ ನಿಗದಿಪಡಿಸುವುದು.

1. ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಆಡಳಿತ ಬ್ಲಾಕ್‌ನ ಕಟ್ಟಡಗಳು, ಅದಕ್ಕೆ ಹೊಂದಿಕೊಂಡಿರುವ ಕಟ್ಟಡಗಳು, ಸಿಬ್ಬಂದಿ ವಸತಿ ಗೃಹಗಳು, ಅಥಿತಿ ಗೃಹ ಈ ಕಟ್ಟಡಗಳಿಗಿರುವ ಒಂದು ಎಕರೆ ಜಮೀನು ಮತ್ತು ಎರಡು ಎಕರೆ ಹೆಚ್ಚಿನ ಜಮೀನು.

2. ಉಳಿದ 9.5 ಎಕರೆ ಖಾಲಿ ಜಮೀನನ್ನು ಕೆ.ಎಸ್.ಎಸ್.ಐ.ಡಿ.ಸಿ. ಗೆ ಒದಗಿಸುವುದು.

ಚನ್ನಪಟ್ಟಣದ ಜೂಟು ರೇಷ್ಮೆ ತಯಾರಿಕಾ ಘಟಕದ ಪುನಃಶ್ಚೇತನಕ್ಕೆ ಖಾಸಗಿಯವರ ಭಾಗವಹಿಸುವಿಕೆಗೆ ಅಭಿಮತವನ್ನು (ಇ.ಒ.ಐ) ಕರೆಯುವುದು. 2-3 ಬಾರಿ ನಿಗದಿತ ಕಾಲಾವಕಾಶ ನೀಡಿದ ನಂತರವೂ ಪ್ರತಿಕ್ರಿಯೆ ಬಾರದಿದ್ದಲ್ಲಿ ಮುಂದಿನ ಕ್ರಮ ತೆಗೆದುಕೊಳ್ಳಲು ಮತ್ತೆ ಸಚಿವ ಸಂಪುಟದ ಮುಂದೆ ವಿಷಯವನ್ನು ತರುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 1246 ಪೀಠಾಧಿಕಾರಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ).

## ಇಂಧನ ಸಚಿವಾಲಯ

**ವಿಷಯ:** ಮೆ: ಶ್ರೀ ಮಾರುತಿ ಪವರ್ ಜೆನ್ (ಇಂಡಿಯ) ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ 5 ಮೆಗಾವಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹ0ಚಿಕೆ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತ ಸ0ಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸ0ಖ್ಯೆ : ಕೆಆರ್ಇಡಿ/06/ಶಂಬುರಿ/2005/1362 ದಿನಾ0ಕ 25.7.2005.

2. ದಿನಾ0ಕ 28.7.2005 ರ0ದು ನಡೆದ ಹ0ಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಶ್ರೀ ಮಾರುತಿ ಪವರ್ ಜೆನ್ (ಇಂಡಿಯ) ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಶಂಬುರಿ ಗ್ರಾಮದ ಪರ್ಲದ ಬಳಿ ನೇತ್ರಾವತಿ ನದಿಯ ಎಡದಂಡೆ ಕಾಲುವೆಯಲ್ಲಿ 5 ಮೆಗಾವಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹ0ಚಿಕೆ ಮಾಡುವ0ತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹ0ಚಿಕೆ ಸಮಿತಿ ಸಭೆ ನಡವಳಿಯಲ್ಲಿ ಅನುಮೋದಿಸಿದ್ದರನ್ವಯ ಕೂಲ0ಕಷವಾಗಿ ಪರಿಶೀಲಿಸಿದ್ದು ನ0ತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 227 ಎನ್‌ಸಿಇ 2005 ಬೆಂಗಳೂರು, ದಿನಾಂಕ 19ನೇ ಆಗಸ್ಟ್ 2005.**

ಮೆ: ಶ್ರೀ ಮಾರುತಿ ಪವರ್ ಜೆನ್ (ಇಂಡಿಯ) ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ ಸರ್ಕಾರವು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಶಂಬುರಿ ಗ್ರಾಮದ ಪರ್ಲದ ಬಳಿ ನೇತ್ರಾವತಿ ನದಿಯ ಎಡದಂಡೆ ಕಾಲುವೆಯಲ್ಲಿ 5 ಮೆಗಾವಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬ0ಧನೆಗೊಳಪಟ್ಟು ಹ0ಚಿಕೆ ಮಾಡಲಾಗಿದೆ:–

1. (ಅ) ಹ0ಚಿಕೆದಾರರು ಈ ಅದೇಶ ಹೊರಡಿಸಿದ ಮೂರು ತಿ0ಗಳ ಒಳಗಾಗಿ ಸರ್ಕಾರದೊ0ದಿಗೆ ಒಡ0ಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹ0ಚಿಕೆ ತ0ತಾನೇ ರದ್ದಾಗುವುದು. ನ0ತರ, ಕ0ಪೆನಿಯು ಹ0ಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿ0ದಿರುಗಿಸಲಾಗುವುದಿಲ್ಲ.

   (ಆ) ಅ0ತಹ ಒಡ0ಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊ0ಡು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   (ಇ) ಈ ಒಡ0ಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒ0ದಕ್ಕೆ ರೂ. 25,000.00 ದ0ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದ0ತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸ0ಬ0ಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅ0ದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮ0ಡಳಿ ಮತ್ತು ಕಂದಾಯ ಇಲಾಖೆಗಳಿ0ದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡ0ಬಡಿಕೆ ಮಾಡಿಕೊ0ಡ ಒ0ದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

   (ಆ) ಹ0ಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾ0ತ್ರಿಕ ಅನುಮೋದನೆ ಕೊಟ್ಟ ಆರು ತಿ0ಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿ0ಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹ0ಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅ0ಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹ0ಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆ0ದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸ0ದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊ0ದಿಗೆ ವೀಲಿ0ಗ್ ಅ0ಡ್ ಬ್ಯಾ0ಕಿ0ಗ್ ಒಡ0ಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹ0ಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸ0ಬ0ಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಮೆ: ಎ.ಎಂ.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೇಕಾದ ನೀರಿನ ಹರಿವಿನ ಲಭ್ಯತೆಯ ಪ್ರಮಾಣವನ್ನು ಬಿಟ್ಟು ಮಿಕ್ಕ ಹೆಚ್ಚಿನ ನೀರಿನಲ್ಲಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಯೋಜನೆಯನ್ನು ಹಮ್ಮಿಕೊಳ್ಳಬೇಕು. ಇದಕ್ಕೆ ಅನುಗುಣವಾಗಿ ಹಂಚಿಕೆಯಾದ ನಂತರ ಸರ್ಕಾರದೊಂದಿಗೆ ಒಡಂಬಡಿಕೆ ಕರಾರು ಪತ್ರ ಮಾಡಿಕೊಳ್ಳಬೇಕು.

9. ಇದಕ್ಕೆ ಅನುಗುಣವಾಗಿ ಡಿ.ಪಿ.ಆರ್. ಸಲ್ಲಿಸಿ ಸಂಬಂಧಿತ ಇಲಾಖೆಗಳಾದ ಜಲ ಸಂಪನ್ಮೂಲ, ಕಂದಾಯ, ಪರಿಸರ ಅರಣ್ಯ ಮತ್ತು ಜೀವಿಶಾಸ್ತ್ರ ಹಾಗೂ ಕೆ.ಪಿ.ಸಿ.ಎಲ್. ನಿಂದ ಅನುಮತಿ ಪಡೆದು ಅಂತಿಮವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ತಾಂತ್ರಿಕ ಅನುಮೋದನೆ ಪಡೆಯಬೇಕು.
10. ಸರ್ಕಾರದ ಯಾವುದೇ ವಿದ್ಯುತ್ ಯೋಜನೆಗಳಿಂದ ಅಥವಾ ನೀರಾವರಿ ಯೋಜನೆಗಳಿಂದಾಗಲಿ ಈ ಯೋಜನೆಗೆ ನೀರಿನ ಕೊರತೆಯಾದಲ್ಲಿ ಅಥವಾ ಇನ್ನಾವುದೇ ಧಕ್ಕೆಯಾದಲ್ಲಿ ಅಭಿವೃದ್ದಿದಾರರು ಯಾವುದೇ ರೀತಿಯ ಪರಿಹಾರವನ್ನು ನಿರೀಕ್ಷಿಸಬಾರದು ಹಾಗೂ ಉದ್ದೇಶಿತ ಯೋಜನೆಗೆ ಯಾವುದೇ ಹಾನಿಯಾದಲ್ಲಿ ಅದಕ್ಕೆ ಅಭಿವೃದ್ದಿದಾರರೇ ಸಂಪೂರ್ಣ ಜವಾಬ್ದಾರರು.
11. ಸರ್ಕಾರದಿಂದ ಕುಡಿಯುವ ನೀರಿನ ವ್ಯವಸ್ಥೆಗಾಗಿ ನೇತ್ರಾವತಿ ನದಿಯ ನೀರನ್ನು ಉಪಯೋಗಿಸಿಕೊಳ್ಳುವ ಯೋಜನೆಗಳಿರುವುದರಿಂದ ಈ ಯೋಜನೆಗೆ ಜಲ ಸಂಪನ್ಮೂಲ ಇಲಾಖೆಯ ಅನುಮತಿ ಪಡೆಯಬೇಕು.
12. ಈ ಯೋಜನೆಯ ಪ್ರಸ್ತಾವಿತ ಒಡ್ಡಿನಿಂದ ಅಂದಾಜು 1.2 ಕಿ.ಮಿ. ಮೇಲ್ತೊರೆಯ ಬಲ ದಂಡೆಯಲ್ಲಿರುವ ಮಸೀದಿಗೆ ಯಾವುದೆ ರೀತಿಯ ದಕ್ಕೆ ಆಗಕೂಡದು.
13. ಕೆಳ ತೊರೆಯಲ್ಲಿ ಮಂಗಳೂರು ನಗರಕ್ಕೆ ನೀರು ಸರಬರಾಜು ಮಾಡುವ ತುಂಬೆ ನೀರು ಸರಬರಾಜು ವ್ಯವಸ್ಥೆಗೆ ಸಂಬಂಧಿಸಿದ ಇಲಾಖೆಯಿಂದ ಅನುಮತಿ ಪಡೆಯಬೇಕು.
14. ಈ ಯೋಜನೆ ಕುರಿತಾದ ಅಣೆಕಟ್ಟನ್ನು ನಿರ್ಮಿಸುವಲ್ಲಿ ಈಗಾಗಲೇ ಇದೆ ಸ್ಥಳದಲ್ಲಿ ಹಂಚಿಕೆಯಾದ ಮೆ: ಎ.ಎಂ.ಆರ್.ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಯವರೊಂದಿಗೆ ಪರಸ್ಪರ ಒಡಂಬಡಿಕೆ ಮಾಡಿಕೊಳ್ಳಬೇಕು ಹಾಗೂ ಈ ಅಣೆಕಟ್ಟನ್ನು ಹಾಗೂ ಸಂಬಂಧಿತ ಕಾಮಗಾರಿಗೆ ತಗಲುವ ವೆಚ್ಚವನ್ನು ಸಾಮರ್ಥ್ಯಕ್ಕೆ ಅನುಸಾರವಾಗಿ ಸೂಕ್ತ ಅನುಪಾತದಲ್ಲಿ ಅಭಿವೃದ್ದಿದಾರರು ಭರಿಸಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1204

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಇಐಎಲ್-ಬಿಜಿಎಂ/2005/1278 ದಿನಾಂಕ 15.7.2005.
2. ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಮೆ: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಬೆಳಗಾಂ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ 37.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರ ನಡವಳಿಗಳಲ್ಲಿ ನೆಡೆದ ಹಂಚಿಕೆ ಸಮಿತಿ ಸಭೆಯು ಅನುಮೋದಿಸಿರುತ್ತದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 201 ಎನ್‌ಸಿಇ 2005 ಬೆಂಗಳೂರು, ದಿನಾಂಕ 18ನೇ ಆಗಸ್ಟ್ 2005**

ಮೆ: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಬೆಳಗಾಂ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ 37.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl No. | Proposed capacity in MW | Nearby villages of the proposed areas | Geographical area description of the project |
|---|---|---|---|
| *1* | *12 MW* | *Kunchenahalli, Tyajavalli, Biranakere, Shimoga District.* | *A non-contiguous independent N-S oriented hillocks are held in a cluster and are situated on the S-W of Biranakere and South of Kunchenhalli villages and the area is situated in the Kunchenhalli State forest. It is also called as Kunchenhalli Gudda. The external features of the area as per the topomap it is a fairly dense mixed jungle. The proposed area is covered in the following Geographical co-ordinates:*<br>***Latitude*** *: $14^0$0'18" – $14^0$3'0"N*<br>***Longutide*** *: $75^0$31'28" – $75^0$34'36"E*<br>***Peaks*** *: 840, 784, 833,828, 823,852,828m Amsl* |
| 2 | *20 MW* | *Mallapur, Nesargi, Kolanhatti, Deshnur, Manbarhatti, Belgaum District.* | *A large circular plateau with open scrub feature situated in the Reserved Forest area covered in two toposheets 48 I/9 and 48 I/13. the Vegitation density as seen from the toposheet is fairly dense mixed jungle. The proposed area is coverd in the following Geographical co-odinates:*<br>***Latitude*** *: $15^0$55'0" – $15^0$57'42"N*<br>***Longutide*** *: $74^0$41'50" – $74^0$46'0"E*<br>***Peaks*** *: 870,876,860,829m Amsl* |

| | | | |
|---|---|---|---|
| 3 | 5.6 MW | Hulevanur, Sonhatti, Karankuppi, Belgaum District. | A small plain with N-S orientation is situated in Reserved Forest area and located on the east of Siddeshwara Temple. As per the topomap the external features of the proposed areas are in the mixed jungle and contains boulders. The proposed area is covered in the following Geographical co-ordinates:<br>**Latitude** : $15^0$55'21" – $15^0$57'25"N<br>**Longutide** : $74^0$34'17" – $74^0$35'30"E<br>**Peaks** : 874,861,870,828m Amsl |
| **TOTAL** | | **37.6 MW** | |

1) ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2) ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3) ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4) ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸ೦ಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳ೦ದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1227 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಹೆಚ್.ಪಿ.ನಾಗರಾಜ್, ತಹಶೀಲ್ದಾರ್, ರಾಣಿಬೆನ್ನೂರು, ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಹಾಸನ ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ:ಸಿಬ್ಬಂದಿ(2)31/2004-2005 ದಿನಾಂಕ:20-07-2004.
2. ಕಾರಣ ಕೇಳುವ ನೋಟೀಸು ಸಂ.ಆರ್‌ಡಿ 57 ಎಡಿಇ 2004, ದಿನಾಂಕ: 22-09-04.
3. ಶ್ರೀ ಹೆಚ್.ಪಿ.ನಾಗರಾಜ್, ಇವರ ಲಿಖಿತ ಹೇಳಿಕೆ ದಿನಾಂಕ:07-10-2004.
4. ಶಿವಮೊಗ್ಗ ಜಿಲ್ಲಾಧಿಕಾರಿಯವರ ಪತ್ರದ ಸಂ:ಸಿಬ್ಬಂದಿ(3)ವಿವ 32/04-05 ದಿನಾಂಕ:26-02-05.
5. ಕಾರಣ ಕೇಳುವ ನೋಟೀಸು ಸಂ:ಆರ್‌ಡಿ 31 ಎಡಿಇ 2004, ದಿನಾಂಕ: 25-05-2005.
6. ಶ್ರೀ ಹೆಚ್.ಪಿ.ನಾಗರಾಜ್, ಇವರ ಲಿಖಿತ ಹೇಳಿಕೆ ದಿನಾಂಕ:7-6-2005.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ.ನಾಗರಾಜ್, ಹಿಂದಿನ ತಹಶೀಲ್ದಾರ್, ಆಲೂರು ತಾಲ್ಲೂಕು ಇವರು ಆಲೂರು ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ:10-01-2004ರಂದು (2ನೆಶನಿವಾರ) ಸಕಲೇಶಪುರ ಉಪ ವಿಭಾಗಾಧಿಕಾರಿಗಳವರಿಂದ ಪೂರ್ವಾನುಮತಿ ಪಡೆಯದೇ ಕೇಂದ್ರಸ್ಥಾನ ಬಿಟ್ಟಿರುವುದಾಗಿಯೂ, ಅದರಿಂದ ತುರ್ತು ಮಾಹಿತಿಯನ್ನು ಪಡೆಯಲು ಆ ದಿನದಂದು ಉಪ ವಿಭಾಗಾಧಿಕಾರಿಯವರಿಗೆ ಸಮಸ್ಯೆಯುಂಟಾದ ಕಾರಣ, ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಪತ್ರದಲ್ಲಿ ಹಾಸನ ಜಿಲ್ಲಾಧಿಕಾರಿಯವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿ, ಇವರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ 1ರಿಂದ 4) ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಗಳು 1957ರ ನಿಯಮ 11ರಡಿಯಲ್ಲಿ ಮೇಲ್ಕಂಡ ಪತ್ರದಲ್ಲಿ ಪ್ರಸ್ತಾಪಿಸಲಾಗಿರುವ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತ ಅಧಿಕಾರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:23-09-04ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು. ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಹೆಚ್.ಪಿ.ನಾಗರಾಜ್, ಇವರು ಮೇಲ್ಕಂಡ ನೋಟೀಸಿಗೆ ಲಿಖಿತ ಹೇಳಿಕೆಯನ್ನು ನೀಡಿ, ತಮ್ಮ ವಿರುದ್ಧ ಮಾಡಿರುವ ಎರಡೂ ಆರೋಪಗಳಲ್ಲಿ ತಾವು ಲೋಪವೆಸಗಿಲ್ಲವಾದ್ದರಿಂದ ಈ ಎರಡೂ ಆರೋಪಗಳಿಂದ ಮುಕ್ತಗೊಳಿಸಿ, ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ವಿನಂತಿಸಿಕೊಂಡಿದ್ದಾರೆ.

ಶ್ರೀ ಹೆಚ್.ಪಿ.ನಾಗರಾಜ್, ಇವರು ಈ ಹಿಂದೆ ಸಾಗರ ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ಚುನಾವಣಾ ಕೆಲಸದಲ್ಲಿ ಆಸಕ್ತಿವಹಿಸದೆ, ದಿನಾಂಕ:8-5-2004, 9-5-2004 ಮತ್ತು 10-5-2004ರಂದು ಚುನಾವಣಾ ಕೆಲಸಕಾರ್ಯಗಳನ್ನು ನಿರ್ಲಕ್ಷಿಸಿ, ಅನಧಿಕೃತವಾಗಿ ಗೈರು ಹಾಜರಾಗಿ ಚುನಾವಣಾ ಕೆಲಸಕ್ಕೆ ಅಡಚಣೆ ಉಂಟು ಮಾಡಿ ಕರ್ತವ್ಯಚ್ಯುತಿ ಎಸಗಿದ್ದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮೇಲೆ ಕ್ರಮ ಸಂಖ್ಯೆ(4)ರಲ್ಲಿ ಓದಲಾದ ಪತ್ರದಲ್ಲಿ ಶಿವಮೊಗ್ಗ ಜಿಲ್ಲಾಧಿಕಾರಿಯವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿ, ಇವರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ 1ರಿಂದ 4) ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿಯಲ್ಲಿ ಮೇಲ್ಕಂಡ ಪತ್ರದಲ್ಲಿ ಪ್ರಸ್ತಾಪಿಸಲಾಗಿರುವ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತ ಅಧಿಕಾರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ(5)ರಲ್ಲಿ ಓದಲಾದ ದಿನಾಂಕ:25-05-05ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು. ಕ್ರಮ ಸಂಖ್ಯೆ(6)ರಲ್ಲಿ ಸದರಿ ಅಧಿಕಾರಿಯವರು ತಮ್ಮ ಲಿಖಿತ ಸಮಜಾಯಿಷಿಯನ್ನು ನೀಡಿ ಚುನಾವಣೆ ಪ್ರಾರಂಭದಿಂದ ಮತದಾನ ಆಗುವವರೆಗೆ ದಿನಾಂಕ:7-5-2004ರವರೆಗೆ ಚುನಾವಣಾ ಕೆಲಸಗಳ ನಿರ್ವಹಣೆ ಬಗ್ಗೆ ಯಾವುದೇ ರೀತಿಯ ಲೋಪದೋಷ ಕರ್ತವ್ಯಚ್ಯುತಿಯ ಬಗ್ಗೆ ತಮಗೆ ಚುನಾವಣಾಧಿಕಾರಿಗಳಿಂದಾಗಲೀ, ಜಿಲ್ಲಾ ಚುನಾವಣಾಧಿಕಾರಿಗಳಿಂದಾಗಲೀ ತಮಗೆ ನೋಟೀಸು ಜಾರಿಯಾಗಿಲ್ಲ ಹಾಗೂ ಚುನಾವಣೆ ಸಮರ್ಪಕವಾಗಿ ಆಗಿರುವ ಬಗ್ಗೆ ಸಾಗರ 165 ಚುನಾವಣಾಧಿಕಾರಿಗಳು ಸರ್ಕಾರಕ್ಕೆ ಚುನಾವಣಾ ಆಯೋಗಕ್ಕೆ ವರದಿ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ತಮ್ಮ ವಿರುದ್ಧ ಮಾಡಿರುವ ಆರೋಪಗಳನ್ನು ಒಪ್ಪುವುದಿಲ್ಲ ಎಂದು ತಿಳಿಸಿದ್ದಾರೆ.

ಆದ್ದರಿಂದ ಆಪಾದಿತ ಅಧಿಕಾರಿ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 57 ಎಡಿಇ 2004, ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಹೆಚ್.ಪಿ.ನಾಗರಾಜ್, ತಹಶೀಲ್ದಾರ್, ರಾಣಿಬೆನ್ನೂರು, ಇವರ ವಿರುದ್ಧದ ಪ್ರಸ್ತಾವನೆಯಲ್ಲಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎಸ್.ಸಿ.ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ನಂ.643, 10ನೇ ಮುಖ್ಯ ರಸ್ತೆ, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಸನ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/-(ಐದು ಸಾವಿರ ರೂಪಾಯಿ ಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಹಾಸನ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಮಹಂತೇಶಯ್ಯ**

ಪಿ.ಆರ್. 1291 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ(ಸೇವೆಗಳು-3).

**ವಿಷಯ:** ಶ್ರೀ ರುದ್ರೇಶ್ವರಯ್ಯ, ತಹಶೀಲ್ದಾರ್, ನಂಜನಗೂಡು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಮೈಸೂರು ಜಿಲ್ಲಾಧಿಕಾರಿಗಳ ಅ.ಸ.ಪತ್ರ ಸಂಖ್ಯೆ:ಇಎಸ್‌ಟಿ(2)ಸಿಆರ್ 8/2005-06 ದಿನಾಂಕ:16-7-2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:16-7-2005ರ ಪತ್ರದಲ್ಲಿ ಮೈಸೂರು ಜಿಲ್ಲಾಧಿಕಾರಿಗಳು ಶ್ರೀ ರುದ್ರೇಶ್ವರಯ್ಯ, ತಹಶೀಲ್ದಾರ್, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ, ಇವರ ವಿರುದ್ಧ ಈ ಕೆಳಕಂಡ ಕರ್ತವ್ಯಲೋಪಗಳನ್ನು ಸರ್ಕಾರದ ಗಮನಕ್ಕೆ ತಂದಿರುತ್ತಾರೆ.

i) ಶ್ರೀ ವಿನೋದ್ ಕುಮಾರ್ ಬಿನ್ ವಸಂತಕುಮಾರ್ ಇವರಿಗೆ ವ್ಯವಸಾಯ ಜಮೀನನ್ನುಕೃಷಿ ಉದ್ದೇಶಕ್ಕಾಗಿ ಖರೀದಿಸಲು ಅನುಮತಿ ನೀಡುವ ಅಧಿಕಾರ ಉಪ ವಿಭಾಗಾಧಿಕಾರಿ ಯವರಿಗೆ ದತ್ತವಾಗಿದ್ದು, ತಹಶೀಲ್ದಾರರು ಸದರಿಯವರಿಗೆ ಜಮೀನು ಖರೀದಿಸುವ ದೃಢೀಕರಣ ಪತ್ರ ನೀಡಿ ಕರ್ತವ್ಯಲೋಪ ಎಸಗಿರುವುದು;

ii) ಶ್ರೀ ಮಹದೇವಯ್ಯ ಬಿನ್ ಮಾದಯ್ಯ, ಇವರಿಗೆ ಎಚಗುಂಡ್ಲ ಗ್ರಾಮದಲ್ಲಿ 9-38 ಎಕರೆ ಜಮೀನು ಹೊಂದಿದ್ದು, ಇವರಿಗೆ ಖಾತೆ ಬದಲಾವಣೆಯಾದ ನಂತರ ಸಣ್ಣ ಹಿಡುವಳಿದಾರರ ದೃಢೀಕರಣ ನೀಡಿರುವ ಬಗ್ಗೆ, ನಂಜನಗೂಡು ತಾಲ್ಲೂಕು ಕಸಬಾ ಹೋಬಳಿ ರಾಜಸ್ವ ನಿರೀಕ್ಷಕರು ದಿನಾಂಕ:16-10-2004 ರಂದು ಖಾತೆ ಅನುಮೋದನೆ ಮಾಡಿರುತ್ತಾರೆಂದು, ಆದರೆ ತಹಶೀಲ್ದಾರ್ ರವರು ಖಾತೆಯಾಗುವ ಮೊದಲೇ ವಿಭಾಗ ಪತ್ರದಂತೆ ಅಂದರೆ ದಿನಾಂಕ: 22-9-04 ರಂದು ಅರ್ಜಿದಾರರಿಗೆ ಸಣ್ಣ ಹಿಡುವಳಿದಾರರೆಂದು ದೃಢೀಕರಣ ಪತ್ರ ನೀಡಿ ಕರ್ತವ್ಯಲೋಪ ಎಸಗಿರುವುದು;

iii) ವೀರದೇವನ ಪುರ ಖಾತೆ ಬದಲಾವಣೆ ಸಂಬಂಧ ವೀರದೇವನ ಪುರ ಸರ್ವೆ ನಂ.124/7ಕ್ಕೆ ಭೂ ನ್ಯಾಯ ಮಂಡಳಿಯಿಂದ ಯಾವುದೇ ತಿದ್ದುಪಡಿ ಆದೇಶವಾಗಿರುವುದಿಲ್ಲದಿದ್ದರೂ, ಭೂ ನ್ಯಾಯಮಂಡಳಿಯ ಆದೇಶ ಪಡೆಯದೆ ಖಾತೆ ಬದಲಾವಣೆ ಮಾಡಲು ಆದೇಶ ಮಾಡಿದ್ದು, ಖಾತೆ ಆರ್.ಟಿ.ಸಿ.ಯಲ್ಲಿ ಇಂಧೀಕರಣವಾಗಿಲ್ಲ. ಖಾತೆಬದಲಾವಣೆ ಮಾಡುವ ಮುನ್ನ ತಹಶೀಲ್ದಾರ್ ರವರು ತನ್ನ ಅಧಿಕಾರ ವ್ಯಾಪ್ತಿಗೆ ಇದು ಬರುತ್ತದೆ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸಿ ಕೊಳ್ಳದೆ ಕರ್ತವ್ಯಲೋಪ ಎಸಗಿರುವುದು;

iv) ದಿನಾಂಕ: 3-3-2004ರಲ್ಲಿ ಚುನಾವಣೆ ನೀತಿ ಸಂಹಿತೆ ಜಾರಿಯಲ್ಲಿ ಇದ್ದರೂ ಸಹ ಹರತಲೆ ಗ್ರಾಮದ ಸರ್ವೆ ನಂಬರ್ 179ರಲ್ಲಿ 0.38 ಗುಂಟೆ ಜಮೀನನ್ನು ಸಕ್ರಮಗೊಳಿಸುವ ಸಲುವಾಗಿ ದಿನಾಂಕ: 10-5-2004ರಂದು ಸಮಿತಿಯ ಸಭೆ ಕರೆದು ಜಮೀನನ್ನು ಸಕ್ರಮಗೊಳಿಸಿ ಕರ್ತವ್ಯ ಲೋಪ ಎಸಗಿರುವುದು;

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಜರುಗಿಸುವುದು ಸೂಕ್ತವೆಂದು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 44 ಎಡಿಇ 2005, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2005**

ಸರ್ಕಾರವು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ರುದ್ರೇಶ್ವರಯ್ಯ, ತಹಶೀಲ್ದಾರ್, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ ರವರು ಅಧಿಕಾರ ವ್ಯಾಪ್ತಿ ಮೀರಿ ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿಯ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿಯಿಟ್ಟು, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ, ಅರೋಪಿತ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಮಹಂತೇಶಯ್ಯ**

ಪಿ.ಆರ್. 1293 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).